





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللَّهِ الرَّحْمَٰنِ الرَّحِيمِ ○

1. ಅಲ್ಲ,[1] ನಾನು ಈ (ಮಕ್ಕಾ) ಪಟ್ಟಣದ ಆಣೆ ಹಾಕುತ್ತೇನೆ- — لَآ أُقْسِمُ بِهَٰذَا الْبَلَدِ ①

2. (ಸಂದೇಶವಾಹಕರೇ) ಈ ಪಟ್ಟಣದಲ್ಲಿ ನಿಮ್ಮನ್ನು 'ಧರ್ಮಸಮ್ಮತ' ಗೊಳಿಸಿಕೊಳ್ಳಲಾಗಿದೆ-[2] — وَأَنتَ حِلٌّۢ بِهَٰذَا الْبَلَدِ ②

3. ಮತ್ತು ನಾನು ತಂದೆಯ ಹಾಗೂ ಅವನಿಂದ ಜನಿಸಿದ ಮಕ್ಕಳ ಆಣೆ ಹಾಕುತ್ತೇನೆ- — وَوَالِدٍ وَمَا وَلَدَ ③

4. ವಾಸ್ತವದಲ್ಲಿ ನಾವು ಮಾನವನನ್ನು ಸಂಕಷ್ಟದಲ್ಲೇ ಸೃಷ್ಟಿಸಿದ್ದೇವೆ.[3] — لَقَدْ خَلَقْنَا الْإِنسَانَ فِي كَبَدٍ ④

5. ಅವನನ್ನು ಯಾರೂ ನಿಯಂತ್ರಿಸಲಾರರೆಂದು ಅವನು ಭಾವಿಸಿ ರುವನೇ? — أَيَحْسَبُ أَن لَّن يَقْدِرَ عَلَيْهِ أَحَدٌ ⑤

6. ನಾನು ಧನರಾಶಿಯನ್ನೇ ಖರ್ಚು ಮಾಡಿ ಬಿಟ್ಟೆನೆಂದು ಅವನು ಹೇಳುತ್ತಾನೆ. — يَقُولُ أَهْلَكْتُ مَالًا لُّبَدًا ⑥

7. ಅವನನ್ನು ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೆಯೇ?[4] — أَيَحْسَبُ أَن لَّمْ يَرَهُۥٓ أَحَدٌ ⑦

8-9. ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಗೆಯನ್ನೂ — أَلَمْ نَجْعَل لَّهُۥ عَيْنَيْنِ ⑧

---

1. ಅರ್ಥಾತ್- ನೀವು ಭಾವಿಸಿಕೊಂಡಿರುವುದು ಸತ್ಯವಲ್ಲ.
2. ಅರ್ಥಾತ್- ಪ್ರಾಣಿಗಳಿಗೂ ಅಭಯ ಪ್ರಾಪ್ತವಿರುವ ಈ ನಗರದಲ್ಲಿ ನಿಮ್ಮ ಮೇಲೆ ಅಕ್ರಮವೆಸಗುವುದನ್ನು ಧರ್ಮಸಮ್ಮತಗೊಳಿಸಲಾಗಿದೆ.
3. ಅರ್ಥಾತ್- ಈ ಲೋಕ ಮಾನವನಿಗೆ ಸವಿಯುಣ್ಣುವ ಮತ್ತು ಸುಖದ ಸುಪ್ಪತ್ತಿಗೆಯಲ್ಲಿರುವ ಸ್ಥಳವಲ್ಲ. ಬದಲಾಗಿ ಇದು ಪರಿಶ್ರಮಪಡುವ ಮತ್ತು ಕಾಠಿಣ್ಯಗಳನ್ನು ಸಹಿಸಿಕೊಳ್ಳುವ ಸ್ಥಳವಾಗಿದೆ. ಯಾವ ಮಾನವನೂ ಈ ಪರಿಸ್ಥಿತಿಯಿಂದ ದಾಟದಿರಲಾರ.
4. ಅರ್ಥಾತ್- ದುರಹಂಕಾರವನ್ನು ಮೆರೆಯುವ ವ್ಯಕ್ತಿಗೆ, ಇದನ್ನೆಲ್ಲಾ ನೋಡುವ ದೇವನೊಬ್ಬ ಮೇಲಿದ್ದಾನೆ. ಈ ಸಂಪತ್ತನ್ನು ಯಾವ ಮೂಲದಿಂದ ಗಳಿಸಿ ಯಾವುದರಲ್ಲಿ ಖರ್ಚು ಮಾಡಿದೆ ಎಂದು ಅವನು ನೋಡುತ್ತಿದ್ದಾನೆಂದು ತಿಳಿದಿಲ್ಲವೇ?

ಎರಡು ತುಟಿಗಳನ್ನೂ ಕೊಟ್ಟಿಲ್ಲವೇ?[5]

وَلِسَانًا وَّشَفَتَيْنِ ﴿٩﴾

10. ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನು ತೋರಿಸಿ ಕೊಡಲಿಲ್ಲವೇ?

وَهَدَيْنٰهُ النَّجْدَيْنِ ﴿١٠﴾

11. ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ.

فَلَا اقْتَحَمَ الْعَقَبَةَ ﴿١١﴾

12. ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا الْعَقَبَةُ ﴿١٢﴾

13. ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು-

فَكُّ رَقَبَةٍ ﴿١٣﴾

14-16. ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು.

اَوْ اِطْعٰمٌ فِيْ يَوْمٍ ذِيْ مَسْغَبَةٍ ﴿١٤﴾
يَّتِيْمًا ذَا مَقْرَبَةٍ ﴿١٥﴾
اَوْ مِسْكِيْنًا ذَا مَتْرَبَةٍ ﴿١٦﴾

17. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವುದು.

ثُمَّ كَانَ مِنَ الَّذِيْنَ اٰمَنُوْا وَتَوَاصَوْا بِالصَّبْرِ وَتَوَاصَوْا بِالْمَرْحَمَةِ ﴿١٧﴾

18. ಇವರೇ ಬಲಗಡೆಯವರು.

اُولٰٓئِكَ اَصْحٰبُ الْمَيْمَنَةِ ﴿١٨﴾

19. ಮತ್ತು ನಮ್ಮ ಸೂಕ್ತಗಳನ್ನು ತಿರಸ್ಕರಿಸಿದವರು ಎಡಗಡೆಯವರು.[6]

وَالَّذِيْنَ كَفَرُوْا بِاٰيٰتِنَا هُمْ اَصْحٰبُ الْمَشْئَمَةِ ﴿١٩﴾

20. ಅವರ ಮೇಲೆ ನರಕಾಗ್ನಿಯು ಆವರಿಸಿಕೊಂಡಿರುವುದು.

عَلَيْهِمْ نَارٌ مُّؤْصَدَةٌ ﴿٢٠﴾ ع ١٥

---

5. ಅರ್ಥಾತ್- ನಾವು ಜ್ಞಾನ ಮತ್ತು ವಿವೇಕದ ಮೂಲಗಳನ್ನು ನೀಡಿಲ್ಲವೇ?
6. ಬಲಗಡೆಯವರು ಮತ್ತು ಎಡಗಡೆಯವರು ಎಂಬುದರ ವಿವರಣೆಗೆ ಅಲ್ ವಾಕಿಅಃ ಅಧ್ಯಾಯದ 8,9,27 ಮತ್ತು 41ನೆಯ ಸೂಕ್ತಗಳನ್ನು ನೋಡಿರಿ.